ತಮಿಳ್ ಸೆಲ್ವಿ *

# ಅರೆತಿಪ್ಪೂರಿನ ಜೈನ ಅವಶೇಷಗಳು

ತನ್ನೊಡಲಿನಲ್ಲಿ ಇತಿಹಾಸವನ್ನು ಅಡಗಿಸಿಕೊಂಡಿರುವ ಕರ್ನಾಟಕದ ಅನೇಕ ಹಳ್ಳಿಗಳಲ್ಲಿ ಮಂಡ್ಯ ಜಿಲ್ಲೆ, ಮದ್ದೂರು ತಾಲುಕಿಗೆ ಸೇರಿದ ಅರೆತಿಪ್ಪೂರು ಸಹ ಒಂದು. ಗಂಗರ ಗಂಗವಾಡಿ ೯೬೦೦೦ ದೊಳಗಿನ ಒಂದು ಸ್ಥಳ ಈ ತಿಪ್ಪೂರು. ತಿಪ್ಪೂರಿನಲ್ಲಿ ಶಾಸನಗಳ ಸಂಖ್ಯಾಬಾಹುಳ್ಯ ವಿಷಯ ವೈವಿಧ್ಯಗಳ ವೈಪುಲ್ಯವಿಲ್ಲದಿದ್ದರೂ ಜೈನ ಅವಶೇಷಗಳ ಸಮೃದ್ಧತೆಯಿದೆ. ಪ್ರಾಚೀನ ಕರ್ನಾಟಕದ ಪ್ರಮುಖ ಜೈನಕೇಂದ್ರಗಳಲ್ಲಿ ಇದೂ ಒಂದಾಗಿತ್ತು. ಅರೆತಿಪ್ಪೂರಿನ ಪ್ರಾಚೀನ ಉಲ್ಲೇಖವಿರುವ ಕ್ರಿ.ಶ. ೯೧೬ರಲ್ಲಿ ರಚಿತವಾದ ತಿಪ್ಪೂರಿನ ನೆರೆಯೂರಾದ ಕೂಲಿಗೆರೆ ಶಾಸನವು, ಈ ಬೆಟ್ಟದ ಮೇಲಿನ ಒಂದು ಬಸದಿಯನ್ನು ಗಂಗರ ನೀತಿಮಾರ್ಗ ಪೆರ್ಮಾನಡಿಯ ಸಾಮಂತನಾದ ಮಣಲೆಯಾರನು ನಿರ್ಮಿಸಿದನೆಂದು ತಿಳಿಸುತ್ತದೆ. ಶಾಸನಗಳಲ್ಲಿ ಇದನ್ನು ಕನಕಗಿರಿ ತೀರ್ಥ ಎಂದೇ ವರ್ಣಿಸಲಾಗಿದೆ. ಜೈನ ಸಂಪ್ರದಾಯದಲ್ಲಿ ಎಲ್ಲ ಪವಿತ್ರ ಕ್ಷೇತ್ರಗಳನ್ನೂ ಕನಕಗಿರಿ ತೀರ್ಥ ಎಂದು ಕರೆಯುವ ಸಂಪ್ರದಾಯವಿದೆ. ಜಂಬೂ ದ್ವೀಪದಲ್ಲಿ ೨೦೦ ಕನಕಗಿರಿ ತೀರ್ಥಗಳಿದ್ದವೆಂದು ಪಂಪ ಹೇಳುತ್ತಾನೆ. ಅರೆತಿಪ್ಪೂರು ಸಹ ಜೈನರ ಪವಿತ್ರ ಕ್ಷೇತ್ರಗಳಲ್ಲಿ ಒಂದಾಗಿತ್ತೆನ್ನಬಹುದು.

ಶ್ರೀ ಶುಭಚಂದ್ರರವರು[1] ಶ್ರವಣಬೆಳಗೊಳದಲ್ಲಿ ಚಾಮುಂಡರಾಯನಿಂದ ಗೊಮ್ಮಟೇಶ್ವರನ ಮಹಾನ್ ಮೂರ್ತಿಯ ನಿರ್ಮಾಣವಾದದ್ದೇ ಮುಂದಿನವರಿಗೆ ಸ್ಫೂರ್ತಿಯಾಗಿ ಅನೇಕ ಮೂರ್ತಿಗಳು ನಿರ್ಮಾಣವಾಗಿರಬಹುದೆನ್ನುತ್ತಾರೆ. ಆದರೆ ಕ್ರಿ.ಶ. ೯೧೬-೧೭ರ ವೇಳೆಗಾಗಲೇ ಕನಕಗಿರಿ ತೀರ್ಥವೆಂದು ತಿಪ್ಪೂರು ಪ್ರಖ್ಯಾತಿ ಹೊಂದಲು ಅಲ್ಲಿನ ದೊಡ್ಡಬೆಟ್ಟದ ಮೇಲಿರುವ ಸು. ೧೦ ಅಡಿ ಎತ್ತರದ ಗೊಮ್ಮಟ ಮೂರ್ತಿಯೇ ಕಾರಣವೆಂದು ನಿಸ್ಸಂಶಯವಾಗಿ ಹೇಳಬಹುದು. ಅರ್ಥಾತ್ ಈ ಗೊಮ್ಮಟ ವಿಗ್ರಹ ಶ್ರವಣಬೆಳಗೊಳಕ್ಕಿಂತ ಪ್ರಾಚೀನ ಅಂದರೆ ಸು. ೮-೯ನೇ ಶತಮಾನದ್ದಿರಬಹುದು.

ತಿಪ್ಪೂರಿನಲ್ಲಿ ಹಿಂದೆ ಹಲವಾರು ಬಸದಿಗಳಿದ್ದುದರ ಕುರುಹಾಗಿ ಇಲ್ಲಿನ ಚಿಕ್ಕಬೆಟ್ಟದ ಮೇಲೆ ಬಸದಿಗಳ ಅಡಿಪಾಯಗಳು, ಜಿನಬಿಂಬಗಳ ಅವಶೇಷಗಳು, ಗೋಡೆ, ಭಾವಣೆಬೋಧಿಗೆ, ಕಂಬ, ಇಟ್ಟಿಗೆಗಳ ರಾಶಿ, ಇತ್ಯಾದಿಗಳ ಅವಶೇಷಗಳಲ್ಲದೆ, ನಾಲ್ಕಾರು ತೀರ್ಥಂಕರರ, ಚಾಮರ ಧಾರಿಗಳ ಹಾಗೂ ಯಕ್ಷರ ವಿಗ್ರಹಗಳು ಇವೆ. ಈ ಸ್ಥಳದ ಬಗ್ಗೆ ಇದುವರೆಗೂ ಮೂರ್ನಾಲ್ಕು ಲೇಖನಗಳು ರಚನೆಯಾಗಿದ್ದರೂ ಸಹ ಅವುಗಳು ಯಾವುವೂ ಇಲ್ಲಿನ ಬಸದಿಗಳ ಬಗ್ಗೆ ಖಚಿತವಾದ ಸಮಗ್ರವಾದ ಮಾಹಿತಿಯನ್ನು ನೀಡಿಲ್ಲ. ಪ್ರಸ್ತುತ ಲೇಖನದಲ್ಲಿ ಆ ನಿಟ್ಟಿನಲ್ಲಿ ಒಂದು ಕಿರು ಪ್ರಯತ್ನವನ್ನು ಮಾಡಲಾಗಿದೆ.

ಅರೆತಿಪ್ಪೂರಿನಲ್ಲಿ ಎರಡು ಬಸದಿಗಳಿದ್ದುದಾಗಿ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಹಾಗೂ ಆ ಬಸದಿಗಳು ಯಾವ ತೀರ್ಥಂಕರನಿಗಾಗಿ ನಿರ್ಮಿಸಲಾಗಿತ್ತೆಂದು ಹೇಳಲು ಆಗುವುದಿಲ್ಲವೆಂದೂ ಅಭಿಪ್ರಾಯಪಟ್ಟಿದ್ದಾರೆ. ಆದರೆ, ನನಗೆ ಸಿಕ್ಕಿರುವ ಆಧಾರಗಳ ಸಹಾಯದಿಂದ ಇಲ್ಲಿ ಐದು

* ನಂ. ೮೨, (ನವರಂಗ್ ಬಾರ್ ಸಮೀಪ), ಎರಡನೇ ಮುಖ್ಯರಸ್ತೆ, ಪ್ರಕಾಶನಗರ, ಬೆಂಗಳೂರು-೫೬೦ ೦೨೧

1 ಜೈನ ಸಾಹಿತ್ಯ ಮತ್ತು ಸಂಸ್ಕೃತಿ, ಕೆಲವು ಅಧ್ಯಯನಗಳು, ಪು. ೧೦೫-೧೦೬

ಬಸದಿಗಳಿದ್ದುದಾಗಿ ಖಚಿತವಾಗಿದೆ. ಚಿಕ್ಕಬೆಟ್ಟದ ಮೇಲೆ ನಾಲ್ಕು ಬಸದಿಗಳಿದ್ದುವು, ಹಾಗೂ ಊರೊಳಗೆ ಇರುವ ಇಂದಿನ ಜೈನೇಶ್ವರ ಗುಡಿಯು ಹಿಂದೆ ಜೈನ ಬಸದಿಯಾಗಿದ್ದುದಕ್ಕೂ ಆಧಾರಗಳಿವೆ. ಹೀಗಾಗಿ ಅರೆತಿಪ್ಪೂರಿನಲ್ಲಿ ಒಟ್ಟು ಐದು ಬಸದಿಗಳಿದ್ದುವೆಂದು ಖಚಿತವಾಗಿ ಗುರುತಿಸಬಹುದು.

ಊರಿನಲ್ಲಿರುವ ಜೈನೇಶ್ವರಿಗುಡಿಯು ಈಗ ಇರುವ ಸ್ಥಳದಲ್ಲಿಯೇ ಹಿಂದೆ ಬಸದಿ ಇತ್ತೆಂದು ಊಹಿಸಲು ಆಧಾರವಾಗಿ ಜೈನೇಶ್ವರಿ ಗುಡಿಯ ಎದುರಿನಲ್ಲಿಯೇ ಹಳೆಯ ಬಸದಿಯ ಅವಶೇಷಗಳಾದ ಕಂಭಗಳು, ಬೋದಿಗೆಗಳು ಇತ್ಯಾದಿಗಳು ಇಟ್ಟಾಡುತ್ತಿವೆ. ಹಿಂದೆ ಇದ್ದ ಬಸದಿಯನ್ನು ನೆಲಸಮ ಮಾಡಿ ಅದೇ ಸ್ಥಳದಲ್ಲಿಯೇ ಹಿಂದಿನ ಅಧಿಷ್ಠಾನದ ಮೇಲೆಯೇ ಹೊಸ ಗುಡಿಯನ್ನು ಕಟ್ಟಿರುವ ಕುರುಹುಗಳು ಕಂಡು ಬರುತ್ತವೆ. ಬಹುಶಃ ಆಗ ಆ ಬಸದಿಯಲ್ಲಿದ್ದಿರಬಹುದಾದ ಯಕ್ಷಿಯ ವಿಗ್ರಹವನ್ನು ಹೊಸ ಗುಡಿಯಲ್ಲಿಟ್ಟು ಪೂಜಿಸುತ್ತಿದ್ದರೆಂದು ಕಾಣುತ್ತದೆ. ಕೆಲವು ವರ್ಷಗಳ ಹಿಂದೆ ಇಲ್ಲಿನ ಗರ್ಭಗುಡಿಯಲ್ಲಿದ್ದ ವಿಗ್ರಹವನ್ನು ಮಂಡ್ಯದ ಕಡೆಯವರು ತೆಗೆದುಕೊಂಡು ಹೋದರೆಂದು ಸ್ಥಳೀಯರು ಕ್ಷೇತ್ರಕಾರ್ಯದ ಸಮಯದಲ್ಲಿ ತಿಳಿಸಿದರು. ಅವರು ಹೇಳುವುದು ಹಿಂದೆ ಇಲ್ಲಿದ್ದ ವಿಗ್ರಹದ ಕಿರೀಟದಲ್ಲಿ ತೀರ್ಥಂಕರನ ಶಿಲ್ಪವಿದ್ದು ಕಂಕುಳಿನಲ್ಲಿ ಮಗುವನ್ನು ಕೂಡಿಸಿಕೊಂಡು ಪಾದಗಳ ಬಳಿ ಸಿಂಹವಿದ್ದ ಸ್ತ್ರೀ ದೇವತೆಯು ಶಿಲ್ಪವನ್ನೂ ಜೈನೇಶ್ವರಿ ಎಂದು ಪೂಜಿಸುತ್ತಿದ್ದುದಾಗಿ ಸ್ಥಳಿಯರು ತಿಳಿಸುತ್ತಾರೆ. ಈ ಎಲ್ಲ ಲಕ್ಷಣಗಳನ್ನು ಗಮನಿಸಿದರೆ, ಅದು ಅಂಬಿಕಾಯಕ್ಷಿಯ ವಿಗ್ರಹ ಎಂದು ಗುರುತಿಸಬಹುದು. ಅಂಬಿಕಾಯಕ್ಷಿಯು ೨೨ನೆಯ ತಿರ್ಥಂಕರನಾದ ನೇಮಿನಾಥ ತೀರ್ಥಂಕರನ ಯಕ್ಷಿಯಾದುದರಿಂದ ಇಲ್ಲಿ ಹಿಂದೆ ನೇಮಿನಾಥ ತೀರ್ಥಂಕರನ ಬಸದಿ ಇತ್ತೆಂದು ಹೇಳಬಹುದು. ಈಗ ಈ ಗುಡಿಯಲ್ಲಿ ಹೊನ್ನೆ ಮರದಿಂದ ಮಾಡಿದ ಲಿಂಗದಾಕೃತಿಯ ಒಂದು ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಇದನ್ನೇ ಜೈನೇಶ್ವರಿ ಎಂದು ಕರೆಯಲಾಗುತ್ತಿದೆ. ಈ ಜೈನೇಶ್ವರಿ ಗುಡಿಯ ಎದುರಿನಲ್ಲಿರುವ ಒಂದು ದುಂಡನೆಯ ಆಕಾರದ ದೀಪಸ್ತಂಭವನ್ನು ಗಂಗ ಶೈಲಿಯ ಸ್ತಂಭ ಎಂದು ಸುಲಭವಾಗಿ ಗುರುತು ಹಿಡಿಯಬಹುದು. ಆದ್ದರಿಂದ ಹಿಂದೆ ಇಲ್ಲಿದ್ದ ನೇಮಿನಾಥ ತೀರ್ಥಂಕರರ ಬಸದಿಯು ಗಂಗರ ಕಾಲದಲ್ಲಿ ನಿರ್ಮಿತವಾಗಿತ್ತೆಂದು ಹೇಳಬಹುದು.



ಅರೆತಿಪ್ಪೂರಿನ ಏಕಶಿಲಾಗೊಮ್ಮಟೇಶ್ವರ

ಇನ್ನು ಚಿಕ್ಕಬೆಟ್ಟದ ಮೇಲೆ ಬಸದಿಗಳಿದ್ದುದಕ್ಕೆ ಸಾಕ್ಷಿಯಾಗಿ ಇಲ್ಲಿ ಬೇರೆ ಬೇರೆ ಕಡೆಗಳಲ್ಲಿ ದೊಡ್ಡ ದೊಡ್ಡದಾದ ಇಟ್ಟಿಗೆಗಳ ರಾಶಿಗಳಿವೆ. ಅವುಗಳ ಕೆಳಭಾಗದಲ್ಲಿ ೪ ಹಳೆಯ ಬಸದಿಗಳ ಪಾಯಗಳು ಸೂಕ್ಷ್ಮವಾಗಿ ಗಮನಿಸಿದರೆ ಮಾತ್ರ ಕಂಡುಬರುತ್ತವೆ. ಈ ಬಸದಿಗಳು ಯಾವ ತೀರ್ಥಂಕರನದ್ದೆಂದು ಸೂಕ್ಷ್ಮ ಪರಿಶೀಲನೆಯಿಂದ ತಿಳಿಯಬಹುದು. ಚಿಕ್ಕಬೆಟ್ಟದ ಮೇಲೆ ಒಂದು ಪಾರ್ಶ್ವದಲ್ಲಿರುವ ದೋಣೆಯ ಒಳಗೆ ಎರಡು ಪಾರ್ಶ್ವನಾಥ ತೀರ್ಥಂಕರರ ವಿಗ್ರಹ, ಹಾಗೂ ಒಂದು ರುಂಡರಹಿತ ತೀರ್ಥಂಕರರ ವಿಗ್ರಹ ಹಾಗೂ ದೋಣೆಯ ಮೇಲ್ಭಾಗದಲ್ಲಿ ಒಂದು ಸುಪಾರ್ಶ್ವನಾಥ ತೀರ್ಥಂಕರನ ವಿಗ್ರಹವಿದೆ. ಈ ತೀರ್ಥಂಕರ ಬಸದಿಗಳೇ ತಿಪ್ಪೂರಿನ ಬೆಟ್ಟದ ಮೇಲಿದ್ದವು ಎಂದು ಹೇಳಬಹುದು.

ರುಂಡರಹಿತ ತೀರ್ಥಂಕರ ಮೂರ್ತಿಯು ಪದ್ಮಾಸನ ಭಂಗಿಯಲ್ಲಿದ್ದು ಮಹಾವೀರನದ್ದೆಂದು ಗುರುತಿಸಬಹುದು. ಅಲ್ಲದೆ ಅಲ್ಲಿಯೇ ಇರುವ ಅವಶೇಷಗಳಲ್ಲಿ ಸಿಂಹಾಸನದ ಅಥವಾ ಸಿಂಹಪೀಠದಲ್ಲಿ ಸಿಂಹಲಾಂಛನವಿದೆ. ಈ



ಅರೆತಿಪ್ಪೂರಿನಲ್ಲಿನ ದೊಣೆಯಲ್ಲಿರುವ ತೀರ್ಥಂಕರರ ಮೂರ್ತಿಗಳು

ಆಧಾರದಿಂದ ಇಲ್ಲಿನ ಇನ್ನೊಂದು ಬಸದಿ ಮಹಾವೀರನದ್ದಾಗಿತ್ತೆನ್ನುವುದರಲ್ಲಿ ಸಂಶಯವಿಲ್ಲ.

ಅದೇ ರೀತಿ ಇಲ್ಲಿರುವ ಇನ್ನೆರಡು ಪಾರ್ಶ್ವನಾಥನ ವಿಗ್ರಹಗಳು ಎರಡು ಬೇರೆ ಬೇರೆ ಪಾರ್ಶ್ವನಾಥನ ಬಸದಿಗೆ ಸೇರಿದವುಗಳೆಂದು ಹೇಳಬಹುದು. ಬೆಟ್ಟದ ಮೇಲಿರುವ ನಾಲ್ಕೂ ಚಾಮರಧಾರಿಗಳು ಪ್ರತಿಯೊಂದೂ ಬೇರೆ ಬೇರೆ ರೀತಿಯದ್ದಾಗಿರುವುದರಿಂದ ಇವು ೪ ಬೇರೆ ಬೇರೆ ಬಸದಿಗಳ ಮುಂದಿದ್ದುವೆಂದು ಖಚಿತವಾಗುತ್ತದೆ.

ದೊಣೆಯ ಮೇಲಿರುವ ಸುಪಾರ್ಶ್ವನಾಥನ ಸುಂದರ ಮೂರ್ತಿ ಇಲ್ಲಿನ ಸುಪಾರ್ಶ್ವನಾಥನ ಬಸದಿಯದ್ದು, ಹಾಗೂ ಇಲ್ಲಿನ ಅವಶೇಷಗಳಲ್ಲಿ ದೊರೆತ ಎರಡು ತೀರ್ಥಂಕರರ ಉಬ್ಬುಶಿಲ್ಪಗಳು ಯಾವುದೋ ಬಸದಿಯ ದೇವಕೋಷ್ಠದಲ್ಲಿದ್ದುವೆಂದು ಊಹಿಸಬಹುದು. ಈ ಆಧಾರಗಳಿಂದ ತಿಪ್ಪೂರಿನ ಬೆಟ್ಟದ ಮೇಲೆ ಒಟ್ಟು ೪ ಬಸದಿಗಳಿದ್ದುದಾಗಿಯೂ ಅವುಗಳಲ್ಲಿ ಎರಡು ಪಾರ್ಶ್ವನಾಥನದ್ದಾದರೆ, ಒಂದು ಮಹಾವೀರನದ್ದು ಮತ್ತೊಂದು ಸುಪಾರ್ಶ್ವನಾಥನದು ಎಂದು ಖಚಿತಗೊಳ್ಳುತ್ತದೆ.

ದೊಣೆಯ ಒಂದು ಬದಿಯಲ್ಲಿ ಅರೆಯ ಮೇಲೆ ೨೪ ತೀರ್ಥಂಕರರನ್ನು ಕಡೆಯುವ ಪ್ರಯತ್ನ ನಡೆದಿದ್ದು ಅವು ಅಪೂರ್ಣವಾಗಿವೆ. ದೊಡ್ಡ ಬೆಟ್ಟದ ಮೇಲಿರುವ ಸು. ೧೦ ಅಡಿ ಎತ್ತರದ ಏಕಶಿಲಾ ಗೊಮ್ಮಟ ಮೂರ್ತಿಯು ಕಣಶಿಲೆಯಾಗಿದ್ದು ಶ್ರವಣಬೆಳಗೊಳದ ಮೂರ್ತಿಗಿಂತ ಪ್ರಾಚೀನವಾಗಿದೆ. ಇದೂ ಗಂಗರ ಕಾಲದ ಮತ್ತೊಂದು ಶ್ರೇಷ್ಠ ರಚನೆ ಎಂದೇ ಹೇಳಬಹುದು.

ಒಟ್ಟಾರೆಯಾಗಿ ಅರೆತಿಪ್ಪೂರು ಒಂದು ಪ್ರಾಚೀನ ಜೈನ ಕೇಂದ್ರವಾಗಿತ್ತು. ಅಲ್ಲಿ ಕನಿಷ್ಠ ಐದು ಬಸದಿಗಳಿದ್ದವು. ಅವು ಬಹುಮಟ್ಟಿಗೆ ಪಾರ್ಶ್ವ, ಸುಪಾರ್ಶ್ವ, ಮಹಾವೀರ ಮತ್ತು ನೇಮಿನಾಥ ತೀರ್ಥಂಕರರುಗಳಿಗೆ ಸೇರಿದವಾಗಿದ್ದವೆಂದು ಆಂತರಿಕ ಹಾಗೂ ಬಾಹ್ಯ ಪ್ರಮಾಣಗಳ ಆಧಾರದಿಂದ ಖಚಿತವಾಗಿ ಗುರುತಿಸಬಹುದಾಗಿದೆ.

O